


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1785 (2021)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : ಡೊಮಗೇರಾ ಗ್ರಾಮವನ್ನು ದಾಂಡೇಲಿ ತಾಲ್ಲೂಕಿಗೆ ಸೇರ್ಪಡೆಗೊಳಿಸಬಾರದ ಬಗ್ಗೆ

(ಅ) ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಡೊಮಗೇರಾ ಗ್ರಾಮವನ್ನು ದಾಂಡೇಲಿ ತಾಲ್ಲೂಕಿಗೆ ಸೇರ್ಪಡೆಗೊಳಿಸಬಾರದೆಂದು ಆಗ್ರಹಿಸಿ ಗ್ರಾಮಸ್ಥರು ಪ್ರತಿಭಟನೆ ಮಾಡುತ್ತಿದ್ದು ಎಲ್ಲಾ ಅಧಿಕಾರಿಗಳಿಗೆ ಪತ್ರದ ಮುಖಾಂತರ ವಿನಂತಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಆ) ಡೋಮಗೇರಾ ಗ್ರಾಮದ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಹಿತದೃಷ್ಠಿಯಿಂದ, ಸದರಿ ಗ್ರಾಮವನ್ನು ಹಳಿಯಾಳ ತಾಲ್ಲೂಕಿನಲ್ಲಿಯೇ ಇರಲು ಕ್ರಮ ಕೈಗೊಳ್ಳಲಾಗುವುದು ?